# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 921 (1085) |
| ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ವಿಷಯ | ಕೋವಿಡ್‌ನಿಂದ ಮೃತಪಟ್ಟ ಕುಟುಂಬಕ್ಕೆ ಪರಿಹಾರ ನೀಡಿಕೆ ಬಗ್ಗೆ. |
| ಉತ್ತರಿಸಬೇಕಾದ ದಿನಾಂಕ | 22-12-2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| **ಪ್ರಶ್ನೆ** | **ಉತ್ತರ** |
| ಅ) ಕೋವಿಡ್-19 ಅವಧಿಯಲ್ಲಿ ಇದುವರೆವಿಗೆ ಕೋವಿಡ್ ಸಾಂಕ್ರಾಮಿಕ ರೋಗದಿಂದ ಮೃತಪಟ್ಟವರ ಸಂಖ್ಯೆ ಎಷ್ಟು; | ಆರೋಗ್ಯ ಇಲಾಖೆಯ ಮಾಹಿತಿಯನ್ವಯ ರಾಜ್ಯದಲ್ಲಿ ನವೆಂಬರ್-2021 ರ ಅಂತ್ಯಕ್ಕೆ ಒಟ್ಟು 38,195 ಕೋವಿಡ್ ಮೃತ ಪ್ರಕರಣಗಳು ವರದಿಯಾಗಿರುತ್ತದೆ. |
| ಆ) ಮೃತಪಟ್ಟವರ ಕುಟುಂಬಕ್ಕೆ ತಲಾ ಎಷ್ಟು ಮೊತ್ತದ ಪರಿಹಾರ ನೀಡಲಾಗುತ್ತಿದೆ; | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕೋವಿಡ್‌ನಿಂದ ಮೃತಪಟ್ಟ ಎಲ್ಲಾ ಪ್ರಕರಣಗಳಲ್ಲಿ ರೂ 50,000/- ಗಳ ಪರಿಹಾರ ಧನವನ್ನು ರಾಜ್ಯ ವಿಪತ್ತು ಪರಿಹಾರ ನಿಧಿ (SDRF) ಯಿಂದ ನೇರ ಹಣ ಸಂದಾಯದ ಮೂಲಕ ಫಲಾನುಭವಿಗಳಿಗೆ ಪಾವತಿಸಲಾಗುತ್ತಿದೆ ಹಾಗೂ ಕೋವಿಡ್‌ನಿಂದ ಮೃತರಾದ ಬಿ.ಪಿ.ಎಲ್ ಕುಟುಂಬಕ್ಕೆ ರಾಜ್ಯ ಸರ್ಕಾರದಿಂದ ಹೆಚ್ಚುವರಿಯಾಗಿ ರೂ 1.00 ಲಕ್ಷ ಪರಿಹಾರವನ್ನು ಚೆಕ್ ಮೂಲಕ ವಿತರಿಸಲಾಗುತ್ತಿದೆ. |
| ಇ) ಇದುವರೆವಿಗೂ ಎಷ್ಟು ಕುಟುಂಬದವರಿಗೆ ಪರಿಹಾರ ನೀಡಲಾಗಿದೆ; | ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಒಟ್ಟು 20,500 ಫಲಾನುಭವಿಗಳಿಗೆ ರೂ 50,000/- ಗಳ ಪರಿಹಾರವನ್ನು ನೇರ ನಗದು ವರ್ಗಾವಣೆ ಮೂಲಕ ವಿತರಿಸಲು ಕ್ರಮ ವಹಿಸಲಾಗಿದೆ. ಈ ಪೈಕಿ 3554 ಪ್ರಕರಣಗಳಲ್ಲಿ ಬ್ಯಾಂಕ್ ಖಾತೆಯೊಂದಿಗೆ ಆಧಾರ್ ಸಂಖ್ಯೆ ಜೋಡಣೆಯಾಗದಿರುವುದರಿಂದ ಪರಿಹಾರ ವಿತರಣೆ ವಿಫಲವಾಗಿದ್ದು, ಇಂತಹ ಪ್ರಕರಣಗಳಲ್ಲಿ ಆಧಾರ್ ಜೋಡಣೆಗೆ ಕ್ರಮವಹಿಸಿ ಪರಿಹಾರ ವಿತರಿಸುವಲ್ಲಿ ಕ್ರಮವಹಿಸಲಾಗುತ್ತಿದೆ. ಹಾಗೂ ಜಿಲ್ಲಾಧಿಕಾರಿಗಳಿಂದ 11,278 ಬಿ.ಪಿ.ಎಲ್ ಪ್ರಕರಣಗಳು ಅನುಮೋದಿತಗೊಂಡಿದ್ದು, ಈ ಫಲಾನುಭವಿಗಳಿಗೆ ಚೆಕ್ ವಿತರಣೆ ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಈ) ಸದರಿ ಸಾಂಕ್ರಾಮಿಕ ರೋಗದಿಂದ ತಂದೆ ತಾಯಿಯನ್ನು ಕಳೆದುಕೊಂಡು, ಅನಾಥರಾಗಿರುವ ಮಕ್ಕಳ ಸಂಖ್ಯೆ ಎಷ್ಟು; | ಕೋವಿಡ್-19 ರ ಸಾಂಕ್ರಾಮಿಕ ರೋಗದಿಂದ ತಂದೆ ತಾಯಿಯನ್ನು ಕಳೆದುಕೊಂಡು, ಅನಾಥರಾಗಿರುವ ಮಕ್ಕಳ ಸಂಖ್ಯೆ 160. |
| ಉ) ಸದರಿಯವರ ಶಿಕ್ಷಣ ಹಾಗೂ ಬದುಕಿಗೆ ಯಾವ ಯಾವ ಸೌಲಭ್ಯಗಳನ್ನ ಒದಗಿಸಲಾಗಿದೆ; (ವಿವರ ನೀಡುವುದು) | ಮಕ್ಕಳ ರಕ್ಷಣಾ ನಿರ್ದೇಶನಾಲಯದಡಿ 2021-22 ನೇ ಸಾಲಿನಲ್ಲಿ ಕೋವಿಡ್-19ರ ಕಾರಣದಿಂದ ತಂದೆ-ತಾಯಿ ಇಬ್ಬರನ್ನು ಕಳೆದುಕೊಂಡ 18 ವರ್ಷದೊಳಗಿನ ಮಕ್ಕಳಿಗೆ ಮುಖ್ಯಮಂತ್ರಿ ಬಾಲಸೇವಾ ಯೋಜನೆಯನ್ನು ಅನುಷ್ಠಾನ ಗೊಳಿಸಲಾಗುತ್ತಿದೆ. ಈ ಯೋಜನೆಯಡಿಯಲ್ಲಿ ಕೆಳಕಾಣಿಸಿರುವ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br><br>1. ಕೋವಿಡ್-19 ರ ಕಾರಣದಿಂದ ತಂದೆ ತಾಯಿ ಇಬ್ಬರನ್ನು ಕಳೆದುಕೊಂಡು ವಿಸ್ತೃತ ಕುಟುಂಬದ ಸದಸ್ಯರ ಆರೈಕೆಯಲ್ಲಿರುವ 18 ವರ್ಷದೊಳಗಿನ ಮಕ್ಕಳಿಗೆ 18 ವರ್ಷ ಪೂರ್ಣಗೊಳ್ಳುವವರೆಗೆ ಪ್ರತಿ ತಿಂಗಳು ರೂ.3,500/-ಗಳ ಆರ್ಥಿಕ ಧನ ಸಹಾಯವನ್ನು ಮಗು ಮತ್ತು ಮಗುವಿನ ಕಾನೂನುಬದ್ಧ ಪೋಷಕರ ಜಂಟಿ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು |

2. ಹತ್ತು ವರ್ಷದೊಳಗಿನ ಮಕ್ಕಳ ಪಾಲನೆಗೆ ವಿಸ್ತೃತ ಕುಟುಂಬದ ಸದಸ್ಯರು ಇಲ್ಲದಿದ್ದಲ್ಲಿ ಅಂತಹ ಮಕ್ಕಳನ್ನು ರಕ್ಷಣೆ ಮತ್ತು ಪಾಲನೆಗಾಗಿ ನೋಂದಾಯಿತ ಮಕ್ಕಳ ಪಾಲನಾ ಸಂಸ್ಥೆಗೆ ದಾಖಲಿಸುವುದು
3. ರಾಜ್ಯ ಸರ್ಕಾರದ ಸ್ವಾಮ್ಯದ ಮಾದರಿ ವಸತಿ ಶಾಲೆಗಳಲ್ಲಿ ಯಾವ ತರಗತಿಗೆ ಪ್ರವೇಶಕ್ಕೆ ಅವಕಾಶವಿದೆಯೋ ಆ ತರಗತಿಯಿಂದ ಅನ್ವಯವಾಗುವಂತೆ ಪ್ರವೇಶ ಪರೀಕ್ಷೆಗಳಿಲ್ಲದೇ ನೇರವಾಗಿ ಪ್ರವೇಶಾವಕಾಶ ಕಲ್ಪಿಸಿ ಉತ್ತಮ ಗುಣ ಮಟ್ಟದ ಉಚಿತ ಶಿಕ್ಷಣ ನೀಡುವುದು.
4. ಎಸ್.ಎಸ್.ಎಲ್.ಸಿ ಪೂರೈಸಿದ ಮಕ್ಕಳಿಗೆ ಉನ್ನತ ಶಿಕ್ಷಣ ಮತ್ತು ಕೌಶಲ್ಯ ಅಭಿವೃದ್ಧಿಗಾಗಿ ಲ್ಯಾಪ್ ಟಾಪ್ ಅಥವಾ ಟ್ಯಾಬ್ ವಿತರಣೆ.
5. ಹೆಣ್ಣು ಮಕ್ಕಳಿಗೆ 21 ವರ್ಷ ತುಂಬಿದ ನಂತರ ವಿವಾಹ, ಉನ್ನತ ಶಿಕ್ಷಣ ಹಾಗೂ ಸ್ವಯಂ ಉದ್ಯೋಗದ ಉದ್ದೇಶಗಳಿಗಾಗಿ ತಲಾ ರೂ. 1.00 ಲಕ್ಷ ಆರ್ಥಿಕ ಧನಸಹಾಯ ಒದಗಿಸುವುದು.

2) **PM CARES for Children ಯೋಜನೆ :-**

ದಿನಾಂಕ: 11.03.2020 ರ ನಂತರದಲ್ಲಿ ಕೋವಿಡ್-19 ರಿಂದ ಪೋಷಕರಿಬ್ಬರನ್ನು ಕಳೆದುಕೊಂಡಂತಹ ಎಲ್ಲಾ ಮಕ್ಕಳಿಗೆ ಕೇಂದ್ರ ಸರ್ಕಾರದ **"PM CARES for Children"** ಯೋಜನೆಯಡಿ ಯಲ್ಲಿಯೂ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಸದರಿ ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿಯೂ ಅನುಷ್ಠಾನ ಗೊಳಿಸಲಾಗುತ್ತಿದೆ. ಸದರಿ ಯೋಜನೆಯ ಸೌಲಭ್ಯವನ್ನು ಫಲಾನುಭವಿಗಳಿಗೆ ಒದಗಿಸಲು ಅಂಚೆ ಕಛೇರಿಯಲ್ಲಿ ಖಾತೆಯನ್ನು ತೆರೆಯಬೇಕಾಗಿರುತ್ತದೆ ಈ ನಿಟ್ಟಿನಲ್ಲಿ ಅಗತ್ಯಪೂರಕ ಕ್ರಮಗಳನ್ನು ಕೈಗೊಳ್ಳಲಾಗಿದೆ.

ಕೇಂದ್ರ ಸರ್ಕಾರದ PM CARES for Children ಯೋಜನೆಯಡಿ ಕೋವಿಡ್-19 ರ ಕಾರಣದಿಂದ ಇಬ್ಬರೂ ಪೋಷಕರನ್ನು ಕಳೆದುಕೊಂಡ ಮಕ್ಕಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತದೆ.

- ಅಂಚೆ ಕಛೇರಿಯಲ್ಲಿ ಫಲಾನುಭವಿ ಮತ್ತು ಜಿಲ್ಲಾಧಿಕಾರಿಗಳ ಜಂಟಿ ಖಾತೆಯಲ್ಲಿ ಇಟ್ಟಿರುವ ಇಡಿಗಂಟಿನ ಮೇಲೆ ಲಭ್ಯವಾಗುವ ಬಡ್ಡಿ ಹಣವನ್ನು 18 ವರ್ಷ ಪೂರ್ಣಗೊಂಡ ನಂತರ 23 ವಯಸ್ಸಿನವರೆಗೆ ಸ್ಟೈ-ಫಂಡ್ ರೀತಿಯಲ್ಲಿ ಮಾಸಿಕವಾಗಿ ಒದಗಿಸಲಾಗುವುದು.
- ಫಲಾನುಭವಿಗಳು 23 ವರ್ಷಕ್ಕೆ ಬಂದಾಗ ಇಡಿಗಂಟಿನ ರೂಪದಲ್ಲಿ (Lump sum Amout) ರೂ.10,00,000/-ಗಳ ಆರ್ಥಿಕ ನೆರವನ್ನು ಅವರುಗಳ ಮುಂದಿನ ಭವಿಷ್ಯದ ಉದ್ದೇಶಕ್ಕಾಗಿ ಕಲ್ಪಿಸುವುದು.
- ಫಲಾನುಭವಿಗಳ ವಿದ್ಯಾಭ್ಯಾಸ ಮತ್ತು ಉನ್ನತ ಶಿಕ್ಷಣಕ್ಕೆ ನೆರವು ಒದಗಿಸುವುದು.

| | |
|---|---|
| | • ಫಲಾನುಭವಿಗಳಿಗೆ ರೂ.5,00,000/- ಗಳವರೆಗೆ ಉಚಿತ ಆರೋಗ್ಯ ವಿಮೆ ಸೌಲಭ್ಯ ಒದಗಿಸುವುದು.<br>PM CARES ಪೋರ್ಟಲ್‌ನಲ್ಲಿ ಇದುವರೆವಿಗೂ (ದಿನಾಂಕ:20.12.2021 ಅಂತ್ಯಕ್ಕೆ) 157 ಮಕ್ಕಳನ್ನು ಫಲಾನುಭವಿಗಳೆಂದು ಅನುಮೋದಿಸಲಾಗಿದೆ. |
| ಊ) ಇದುವರೆವಿಗೆ ಎಷ್ಟು ಮಂದಿಗೆ ಸದರಿ ಸೌಲಭ್ಯಗಳನ್ನು ಒದಗಿಸಲಾಗಿದೆ; | 2021-22ನೇ ಆರ್ಥಿಕ ಸಾಲಿನಲ್ಲಿ ಮುಖ್ಯಮಂತ್ರಿ ಬಾಲಸೇವಾ ಯೋಜನೆಯಡಿ 156 ಫಲಾನುಭವಿಗಳಿಗೆ (ದಿನಾಂಕ:20.12.2021ರ ಅಂತ್ಯಕ್ಕೆ) ಸೌಲಭ್ಯವನ್ನು ಒದಗಿಸಲಾಗಿದೆ |

**DSSP/LCQ/ 41 /2021**

(ಆರ್.ಅಶೋಕ)
ಕಂದಾಯ ಸಚಿವರು